ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಕೊಳವೆ ಬಾವಿಗಳ ಬಗ್ಗೆ

ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು)-

39 (244) ಪೌರಾಡಳಿತ ಹಾಗೂ ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಬೀದರ್ ನಗರ ಸಭೆಯ ವ್ಯಾಪ್ತಿಯಲ್ಲಿ ಸರ್ಕಾರದ ಒಡೆತನದಲ್ಲಿರುವ ಕೊಳವೆ ಬಾವಿಗಳ ಸಂಖ್ಯೆ ಎಷ್ಟು ಹಾಗೂ ಇವುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮತ್ತು ಕಾರ್ಯನಿರ್ವಹಿಸದಿರುವ ಕೊಳವೆ ಬಾವಿಗಳ ಸಂಖ್ಯೆ ಎಷ್ಟು ; (ವಾರ್ಡ್‌ಗಳವಾರು ವಿವರ ನೀಡುವುದು)

(ಆ) ಕಳೆದ 3 ವರ್ಷಗಳಲ್ಲಿ ಕೊಳವೆ ಬಾವಿಗಳಿಗೋಸ್ಕರ ಖರ್ಚು ಮಾಡಲಾದ ಅನುದಾನ ಎಷ್ಟು ; (ಸಂಪೂರ್ಣ ವಿವರ ನೀಡುವುದು)

(ಇ) ಬೀದರ್ ನಗರ ಸಭೆಯ ವ್ಯಾಪ್ತಿಯಲ್ಲಿ ಸುಮಾರು ಕಡೆಗಳಲ್ಲಿ ಕೊಳಚೆ ಚರಂಡಿ ನೀರು ಹೊರ ಹಾದು ಹೋಗದೇ ಬಾವಿಗಳಲ್ಲಿ ಸೇರುತ್ತಿದ್ದು, ಈ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು ; (ಸಂಪೂರ್ಣ ಮಾಹಿತಿ ನೀಡುವುದು)

(ಈ) ಚರಂಡಿ ನೀರು ಬಾವಿಗಳಿಗೆ ಹೋಗದಂತೆ ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು ? (ಮಾಹಿತಿ ನೀಡುವುದು)